# ಸಮುದಾಯ ಕಲಿಕೆ ಗುಂಪುಗಳು ಮುಂದುವರೆಯಬೇಕು

ರಾಘವೇಂದ್ರ. ಬಿ.ಟಿ.

***

ಹಲವಾರು ವರದಿಗಳು ತಿಳಿಯಪಡಿಸಿದಂತೆ, ಭಾರತದಲ್ಲಿ ಪ್ರತಿಯೊಂದು ಮಗುವೂ ತಡೆರಹಿತ ಅಂತರ್ಜಾಲ ಸೇವೆಗಳ ಮೂಲಕ ಸ್ಮಾರ್ಟ್‌ಫೋನ್/ಡಿಜಿಟಲ್ ಉಪಕರಣಗಳನ್ನು ಬಳಸಿ, ಕಲಿಕೆಯಲ್ಲಿ ತೊಡಗಲು ಅವಶ್ಯಕವಾದ ಸಮಾನ ಅವಕಾಶವನ್ನು ಪಡೆದುಕೊಳ್ಳುವಂತೆ ಮಾಡಲು, ಸುಲಭವಾಗಿ ಮತ್ತು ಕಡಿಮೆ ವೆಚ್ಚದಲ್ಲಿ ಕೈಗೆಟಕುವಂತಹ ಡಿಜಿಟಲ್ ಸೇವೆಗಳನ್ನು ಒದಗಿಸಲು ಬೇಕಾದ ಅಡಿಪಾಯ ಮತ್ತು ಸಂಪನ್ಮೂಲಗಳ ಕೊರತೆಯಿರುವುದು ಕಂಡುಬಂದಿದೆ. ಕರ್ನಾಟಕದ ಸಂದರ್ಭದಲ್ಲಿ, ಆರಂಭದಲ್ಲಿ, ಶಿಕ್ಷಕರು ಎಲ್ಲಿ ಸಾಧ್ಯವಿದೆಯೋ ಅಲ್ಲಿ ತಮ್ಮ ವಿದ್ಯಾರ್ಥಿಗಳನ್ನು ವರ್ಚುವಲ್ ತರಗತಿಗಳು ಮತ್ತು ವಾಟ್ಸ್ಯಾಪ್ ಗುಂಪುಗಳ ಮೂಲಕ ಕಲಿಕೆಯಲ್ಲಿ ತೊಡಗಿಸಲು ಪ್ರಯತ್ನಿಸಿದ್ದರು. ಕೇವಲ ಖಾಸಗಿ ಮತ್ತು ಸರ್ಕಾರಿ ಶಾಲೆಗಳಲ್ಲಿ ಓದುತ್ತಿರುವ, ಅನುಕೂಲಸ್ಥ ಕುಟುಂಬಗಳಿಂದ ಬಂದ, ಅಂತರ್ಜಾಲ ಸೇವೆಗಳು ಮತ್ತು ಸ್ಮಾರ್ಟ್‌ಫೋನ್‌ಗಳು ಲಭ್ಯವಿದ್ದ ವಿದ್ಯಾರ್ಥಿಗಳು ಮಾತ್ರ ತಮ್ಮ ಶಿಕ್ಷಕರು ನಡೆಸುತ್ತಿದ್ದ ಆನ್‌ಲೈನ್ ತರಗತಿಗಳನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಆನ್‌ಲೈನ್ ಕಲಿಕೆಗೆ ಪರಿವರ್ತನೆಗೊಳ್ಳುವುದು ಸುಲಭವಾಗಿರಲಿಲ್ಲ ಮತ್ತು ಬಹುತೇಕ ಸಂದರ್ಭಗಳಲ್ಲಿ ಆರ್ಥಿಕ ಸೌಲಭ್ಯಗಳಿಲ್ಲದ ಕೌಟುಂಬಿಕ ಹಿನ್ನೆಲೆಯ ವಿದ್ಯಾರ್ಥಿಗಳಿಗೆ ಅದು ಅಸಾಧ್ಯವಾಗಿತ್ತು. ಪಾಲಕರು ಮತ್ತು ಶಿಕ್ಷಕರು ತಮಗೆ ಸಾಧ್ಯವಾದಷ್ಟು ಪ್ರಯತ್ನ ಮಾಡಿದರೂ ಕೆಲವೇ ಕೆಲವು ವಿದ್ಯಾರ್ಥಿಗಳಿಗೆ ನೆರವು ನೀಡಲು ಸಾಧ್ಯವಾಯಿತು.

ಶಿಕ್ಷಕರಿಗೆ ಈ ಕುರಿತು ಕಳವಳವಿತ್ತು. ಹೊಸಪೇಟೆ ಬ್ಲಾಕ್‌ನ (ಕರ್ನಾಟಕ) ಮುಖ್ಯೋಪಾಧ್ಯಾಯರೊಬ್ಬರು, 'ಒಂದೆರಡು ದಿನಗಳ ಹಿಂದೆ, ಐದನೇ ತರಗತಿಯ ಬಾಲಕನೊಬ್ಬ ನನ್ನ ಕಚೇರಿಗೆ  ಪಡಿತರ ಸಾಮಾನುಗಳನ್ನು ತೆಗೆದುಕೊಂಡು ಹೋಗಲು ಬಂದಿದ್ದ. ಸಾಮಾನುಗಳನ್ನು ತೆಗೆದುಕೊಂಡಾದ ಮೇಲೆ, ಅವನಿಗೆ ನೋಂದಣಿ ಪುಸ್ತಕದಲ್ಲಿ ಸಹಿ ಮಾಡುವಂತೆ ಹೇಳಿದೆ. ಅದಕ್ಕೆ ಬಾಲಕನು, ತನಗೆ ಸಹಿ ಮಾಡುವುದು ಹೇಗೆಂದು ಮರೆತುಹೋಗಿದೆ ಎಂದು ಉತ್ತರಿಸಿದ ಮತ್ತು ಅದರ ಬದಲಿಗೆ ಹೆಬ್ಬೆರಳಿನ ಗುರುತನ್ನು ತೆಗೆದುಕೊಳ್ಳಬಹುದೇ ಎಂದು ಕೇಳಿದ.

ನನಗೆ ನಮ್ಮ ವ್ಯವಸ್ಥೆಯ ಬಗ್ಗೆ ನಾಚಿಕೆಯಾಯಿತು. ನಾವು ಮಕ್ಕಳನ್ನು ಶಿಕ್ಷಣದಲ್ಲಿ ತೊಡಗಿಸಿಕೊಳ್ಳುವಂತೆ ಮಾಡಬೇಕು' ಎಂದು ನಮಗೆ ಹೇಳಿದರು.

## ವಿದ್ಯಾಗಮ ಕಾರ್ಯಕ್ರಮ

ಆರಂಭದಲ್ಲಿ ಶಾಲೆಗಳ ಪುನರಾರಂಭದ ಬಗ್ಗೆ ಅನಿಶ್ಚಿತತೆಯಿದ್ದಾಗ, ಸಾರ್ವಜನಿಕ ಶಿಕ್ಷಣ ಇಲಾಖೆಯು (DPI- Department of Public Instruction) *ವಿದ್ಯಾಗಮ* ಎನ್ನುವ ನಿರಂತರ ಕಲಿಕೆಯ ಕಾರ್ಯಕ್ರಮವೊಂದನ್ನು ಆರಂಭಿಸುವ ಆದೇಶವನ್ನು ಹೊರಡಿಸಿತು. ಅದರ ಪ್ರಕಾರ, ಶಾಲಾ ಶಿಕ್ಷಕರು ತಮ್ಮ ಹಳ್ಳಿಗಳಲ್ಲಿ ಮಕ್ಕಳ ಮನೆಬಾಗಿಲಿಗೇ ಶಾಲೆಯನ್ನು ಕೊಂಡೊಯ್ಯಬೇಕಾಗಿತ್ತುತ್ತು. ಶಿಕ್ಷಕರು ಸಮುದಾಯಗಳಿಗೆ ಭೇಟಿ ನೀಡಿ, ದೇವಸ್ಥಾನದ ಆವರಣ, ಸಮುದಾಯ ಭವನ, ಮರಗಳಡಿ ಹೀಗೆ ಅನುಕೂಲಕರ ವಾತಾವರಣದಲ್ಲಿ ತರಗತಿಗಳನ್ನು ನಡೆಸಲು ಆರಂಭಿಸಿದರು. ಕೆಲವು ತಿಂಗಳುಗಳ ಕಾಲ ಯಶಸ್ವಿಯಾಗಿ ನಡೆದ ಮೇಲೆ, ಕೋವಿಡ್-೧೯ ಪ್ರಕರಣಗಳು ಹೆಚ್ಚಾದ ವರದಿಗಳು ಬಂದ ಕಾರಣ, ಸರ್ಕಾರವು ಈ *ವಿದ್ಯಾಗಮ* ಕಾರ್ಯಕ್ರಮವನ್ನು ನಿಲ್ಲಿಸಿತು. ಶಿಕ್ಷಕರು ವಾಟ್ಸ್ಯಾಪ್ ಮೂಲಕ ಶಿಕ್ಷಣ ಸಂಬಂಧೀ ಸೂಚನೆ ನೀಡುವುದನ್ನು ಮುಂದುವರೆಸಿದರು ಮತ್ತು ಮಕ್ಕಳಿಗೆ *ಡಿಡಿ ಚಂದನ ಟಿವಿಯ*ಲ್ಲಿ ಪಾಠಗಳನ್ನು ಆಲಿಸುವಂತೆ, ನೋಡುವಂತೆ ಉತ್ತೇಜಿಸಿದರು.

ಆದರೆ ಕರ್ನಾಟಕದಲ್ಲಿ ಕಾರ್ಯಕರ್ತರು ವಿದ್ಯಾಗಮವನ್ನು ಮತ್ತೆ ಆರಂಭಿಸುವಂತೆ ಆಗ್ರಹಿಸತೊಡಗಿದರು. ಬಹಳಷ್ಟು ಕುಟುಂಬಗಳಿಗೆ ಅಂತರ್ಜಾಲ ಸೇವೆಗಳನ್ನು ಪಡೆದುಕೊಳ್ಳುವಷ್ಟು ಸಾಮರ್ಥ್ಯವಿರಲಿಲ್ಲ. ಆದ್ದರಿಂದ ರಾಜ್ಯ ಸರ್ಕಾರವು ಕಾರ್ಯಕ್ರಮವನ್ನು ಮತ್ತೆ ಆರಂಭಿಸಿತು ಮತ್ತು ಶಿಕ್ಷಕರನ್ನು ಕೋವಿಡ್-19 ರ ಶಿಷ್ಟಾಚಾರಗಳನ್ನು ಕಠಿಣವಾಗಿ ಪಾಲಿಸುವುದರೊಂದಿಗೆ ಶಾಲಾ ಆವರಣದಲ್ಲಿಯೇ ಮಕ್ಕಳಿಗೆ ತರಗತಿಗಳನ್ನು ನಡೆಸಬೇಕೆಂದೂ ಆದೇಶಿಸಿತು. ಡಿಜಿಟಲ್ ಮತ್ತು ನೇರವಾಗಿ ಮಕ್ಕಳಿಗೆ ಪಾಠ ಮಾಡುವ ವಿಧಾನಗಳ ಮೇಳೈಸುವಿಕೆಯು ಡಿಜಿಟಲ್ ಅಂತರವನ್ನು ಕೆಲ ಮಟ್ಟಿಗೆ ತುಂಬುವಲ್ಲಿ ನೆರವಾಯಿತು. ಆದರೆ ದೇಶದಲ್ಲಿ ಹೆಚ್ಚಿದ ಕೋವಿಡ್-19 ನ ಎರಡನೇ ಅಲೆಯಿಂದಾಗಿ ಈ ಕಾರ್ಯಕ್ರಮವನ್ನು ಕೂಡ ನಿಲ್ಲಿಸಬೇಕಾಯಿತು.

### ಸಮುದಾಯ ಕಲಿಕೆ ಗುಂಪುಗಳ ರಚನೆ

*ವಿದ್ಯಾಗಮ*ವನ್ನು ನಿಲ್ಲಿಸಿದಾಗ, ಶಿಕ್ಷಕರು ವರ್ಚುವಲ್ ತರಗತಿಗಳನ್ನು ಮತ್ತೆ ಆರಂಭಿಸಿದರು. ಆದರೆ ಭಾರತದ ಉಳಿದೆಲ್ಲ ಭಾಗಗಳಂತೆಯೇ ನಮ್ಮ ಹೊಸಪೇಟೆಯಲ್ಲಿಯೂ ಕೆಲವೇ ಪಾಲಕರು ಸ್ಮಾರ್ಟ್‌ಫೋನ್/ಟಾಬ್ಲೆಟ್ ಮತ್ತು ಅಂತರ್ಜಾಲ ಸೇವೆಗಳನ್ನು ಪಡೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದರು. ಅದೂ ಕೂಡ ಅವರು ಇವುಗಳ ಮೇಲೆ ಎಷ್ಟು ಹಣವನ್ನು ವ್ಯಯಿಸಬಲ್ಲರು ಎನ್ನುವುದರ

ಮೇಲೆ ಅವಲಂಬಿಸಿತ್ತು. ಆನ್‌ಲೈನ್ ತರಗತಿಗಳು ಪಾಲಕರಿಗೆ ಬೇರೊಂದು ಕಾರಣಕ್ಕೆ ಸಂಕಷ್ಟಕ್ಕೀಡುಮಾಡುತ್ತಿದ್ದವು. ಅದೇಂದರೆ, ಅವರು ಮಕ್ಕಳನ್ನು ಒಬ್ಬಂಟಿಯಾಗಿ ಮನೆಯಲ್ಲಿ ಬಿಟ್ಟು ಕೆಲಸಕ್ಕೆ ಹೋಗುವ ಹಾಗಿರಲಿಲ್ಲ. ಅದಕ್ಕೆ ಪರಿಹಾರರೂಪವಾಗಿ,) ಪರಿಕಲ್ಪನೆಯು ಮೂಡಿಬಂದಿತು ಮತ್ತು ಅದನ್ನು ಶಿಕ್ಷಕರು ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳಲ್ಲಿ ಹಂಚಿಕೊಳ್ಳಲಾಯಿತು.

2021 ರ ಜನವರಿಯಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಕೈಗೊಂಡ ಅಧ್ಯಯನವೊಂದು, ಪ್ರಾಥಮಿಕ ಶಾಲಾ ಮಕ್ಕಳಲ್ಲಿ ಕಲಿಕೆಯ ನಷ್ಟವುಂಟಾಗಿದೆ ಎನ್ನುವ ಸಂಗತಿಯನ್ನು ತಿಳಿಯಪಡಿಸಿತು. ವರದಿಯ ಅಂಶಗಳನ್ನು ಹಂಚಿಕೊಳ್ಳಲು ಮತ್ತು ಭಾಷೆ ಹಾಗೂ ಗಣಿತ ವಿಷಯಗಳಿಗೆ ಸಂಬಂಧಿಸಿದಂತೆ ಈ ನಷ್ಟಗಳನ್ನು ತುಂಬುವಂತಹ ಪರ್ಯಾಯ ವ್ಯವಸ್ಥೆಗಳನ್ನು ಗುರುತಿಸಲು ನಾವು ಕಮ್ಮಟಗಳನ್ನು ಆಯೋಜಿಸಿದೆವು. ಫೌಂಡೇಷನ್‌ನ ತಂಡಗಳು, ತರಗತಿವಾರು ಕಲಿಕೆ ಪರಿಣಾಮ ಮತ್ತು ನಿರೀಕ್ಷಿತ ಸಾಮರ್ಥ್ಯಗಳನ್ನು ಆಧರಿಸಿದ ವರ್ಕ್‌ಶೀಟ್‌ಗಳನ್ನು (ಕಾರ್ಯ ಹಾಳೆ ) ಸಿದ್ಧಪಡಿಸಿದವು. ಅಷ್ಟು ಹೊತ್ತಿಗೆ, ಕರ್ನಾಟಕ ಸರ್ಕಾರವು ಕೂಡ ಶಿಕ್ಷಕರು ಸಮುದಾಯದಲ್ಲಿನ ಸಂಘಟನೆಗಳು, ಸ್ವಯಂಸೇವಕರು ಮತ್ತು ಪಾಲಕರ ಬೆಂಬಲವನ್ನು ತೆಗೆದುಕೊಳ್ಳುವ ಹಾಗೆ ನಿರ್ದಿಷ್ಟ ಯೋಜನೆಗಳ ಮೂಲಕ ಮಕ್ಕಳಿಗೆ ಕಲಿಸಬೇಕು ಎಂದು ಸಲಹೆ ನೀಡಿತು.

ನಾವು, ಶಿಕ್ಷಣ ಇಲಾಖೆಯ ಅಧಿಕಾರಿಗಳು, ಮುಖ್ಯೋಪಾಧ್ಯಾಯರು ಮತ್ತು ಶಿಕ್ಷಕರೊಡಗೂಡಿ ಬ್ಲಾಕ್‌ನಲ್ಲಿ ತರಗತಿಗಳನ್ನು ಆಯೋಜಿಸಿದೆವು. ಆಗ ಅವರಿಗೆ, ಆನ್‌ಲೈನ್ ತರಗತಿ ಮತ್ತು *ವಿದ್ಯಾಗಮ*ಗಳು ಮಕ್ಕಳ ಓದನ್ನು ಸಕಾರಾತ್ಮವಾಗಿ ಪ್ರಭಾವಿಸಿಲ್ಲ ಎಂಬುದಾಗಿ ಅಧ್ಯಯನದಲ್ಲಿ ತಿಳಿದುಬಂದ ಅಂಶಗಳು ಮನದಟ್ಟಾದವು. ಅಧ್ಯಯನದಲ್ಲಿ ತಿಳಿದು ಬಂದ ಅಂಶವೆಂದರೆ, ಆನ್‌ಲೈನ್ ತರಗತಿಗಳಿಗಾಗಿ ಬಳಸಲಾದ ಬೋಧನಾಕ್ರಮಗಳು ಮಕ್ಕಳು ಕಲಿಯುವ ರೀತಿಗೆ ಅನುಕೂಲಕರವಾಗಿಲ್ಲ ಎನ್ನುವುದು. ಮಕ್ಕಳು, ಸಹಪಾಠಿಗಳು ಹಾಗೂ ಶಿಕ್ಷಕರೊಡನೆ ಕಲಿಕಾ ಚಟುವಟಿಕೆಗಳಲ್ಲಿ ಮಾನಸಿಕ ಹಾಗೂ ದೈಹಿಕವಾಗಿ ಭಾಗವಹಿಸುವುದರ ಮೂಲಕ ಕಲಿಯುತ್ತಾರೆ. ಇದು ಶಿಕ್ಷಕರಿಗೆ ಮತ್ತು ಶಾಲಾ ಅಭಿವೃದ್ಧಿ ಹಾಗೂ ಆಡಳಿತ ಸಮಿತಿಗಳಿಗೆ (SDMCs - School Development and managing Committees) ಸಮುದಾಯ ಕಲಿಕೆ ಗುಂಪುಗಳನ್ನು ರಚಿಸಲು ಪ್ರೇರೇಪಣೆ ನೀಡಿತು. ಅವುಗಳಲ್ಲಿ ಸಮುದಾಯದಲ್ಲಿನ ಸ್ವಯಂಸೇವಕರು, ಸಾಧ್ಯವಾದಷ್ಟೂ ಅದೇ ಸ್ಥಳದ, ಶಾಲೆಗಳ ಹಳೆ ವಿದ್ಯಾರ್ಥಿಗಳು ತಮ್ಮ ಬಿಡುವಿನ ವೇಳೆಯಲ್ಲಿ ಶಿಕ್ಷಕರು ಮತ್ತು ಫೌಂಡೇಷನ್‌ನ ಸದಸ್ಯರ ನೆರವು ಮತ್ತು ಬೆಂಬಲದೊಡನೆ ಮಕ್ಕಳೊಡನೆ ತೊಡಗಿಸಿಕೊಳ್ಳುವುದಾಗಿತ್ತು.

ನಾವು ಈ ಪರಿಕಲ್ಪನೆಯೊಂದಿಗೆ ಶಿಕ್ಷಕರ ಬಳಿ ಹೋದಾಗ, ಪರಿಸ್ಥಿತಿಯು ಬಿಗಡಾಯಿಸುತ್ತಿದ್ದ ಹಿನ್ನೆಲೆಯಲ್ಲಿ ಮತ್ತು ಎಂದಿನಂತೆ ಶಾಲೆಗಳು ಪುನರಾರಂಭವಾಗುವ ಭರವಸೆಯಿಲ್ಲದಿದ್ದ ಕಾರಣ, ಅವರಲ್ಲಿ ಬಹಳಷ್ಟು ಶಿಕ್ಷಕರು ತಾವಾಗಿಯೇ ತಮ್ಮ ವಿದ್ಯಾರ್ಥಿಗಳೊಡನೆ ಬೋಧನೆ-ಕಲಿಕೆಯಲ್ಲಿ ತೊಡಗಿಕೊಂಡಿದ್ದರು.

ಅಷ್ಟೊತ್ತಿಗೆ, ಮಕ್ಕಳು ಮುಖಗವುಸು (ಮಾಸ್ಕ್) ಧರಿಸದೆಯೇ ತಮ್ಮ ಸ್ನೇಹಿತರೊಡನೆ ಹೊರಹೋಗಲು ಮತ್ತು ತಮ್ಮ ಕೈಗಳನ್ನು ಸ್ವಚ್ಛವಾಗಿಟ್ಟುಕೊಳ್ಳಲು ಸ್ಯಾನಿಟೈಸರ್/ಸಾಬೂನುಗಳನ್ನು ಬಳಸುವುದನ್ನು ಬಿಟ್ಟುಬಿಟ್ಟಿದ್ದರು. ಪಾಲಕರು, ಕೋವಿಡ್-19 ನ ಭಯದಲ್ಲಿ ಮಕ್ಕಳನ್ನು ಸಮುದಾಯ ಕಲಿಕೆ ಗುಂಪುಗಳಿಗೆ ಕಳುಹಿಸಲು ವಿರೋಧ ವ್ಯಕ್ತಪಡಿಸುತ್ತಿರಲಿಲ್ಲ. ವಾಸ್ತವಿಕವಾಗಿ, ಬಹಳಷ್ಟು ಹಳ್ಳಿಗಳಲ್ಲಿ, ಅವರಿಗೆ ಹಾಗೆ ಮಾಡುವುದರಲ್ಲಿ ಸಂತೋಷವೇ ಇತ್ತು. ಶಿಕ್ಷಕರೂ ಕೂಡ ಅಂತರ್ಗತವಾಗಿ ಹಾಗೆ ಮಾಡಲು ಪ್ರೇರಿತರಾಗಿದ್ದ ಕಾರಣ, ಪ್ರಯತ್ನಗಳನ್ನು ಮುಂದುವರೆಸಲು ನೆರವಾದರು. ಡಿಜಿಟಲ್ ಸೇವೆಗಳನ್ನು ಪಡೆದುಕೊಳ್ಳುವ ಸಾಮರ್ಥ್ಯ ಮತ್ತು ಅವುಗಳ ಲಭ್ಯತೆ, ಅಂತರ್ಜಾಲ ಸೇವೆಗಳು, ಮಕ್ಕಳ ಕಾಳಜಿಯನ್ನು ನಿರಂತರವಾಗಿ ತೆಗೆದುಕೊಳ್ಳುವವರು ಕಡ್ಡಾಯವಾಗಿ ಇರಬೇಕಾದುದು ಮತ್ತು ಅಂತರ್ಜಾಲ ಸಂಪರ್ಕಕ್ಕೆ ಸಂಬಂಧಿಸಿದಂತಹ ಸಮಸ್ಯೆಗಳ ಮೇಲೆ ಈ ಪ್ರಯತ್ನಗಳ ಮೂಲಕ ಗಮನ ಹರಿಸಲಾಯಿತು.

**ಗುಂಪುಗಳು ಹೇಗೆ ಕೆಲಸ ಮಾಡಿದವು**

ಶಿಕ್ಷಕರು ಪ್ರತಿಯೊಂದು ಶಾಲೆಯಲ್ಲಿಯೂ ಇರುವ ಮಕ್ಕಳ ಒಟ್ಟೂ ಸಂಖ್ಯೆಯನ್ನು ಪರಿಗಣಿಸಿ, ಅದರ ಪ್ರಮಾಣಕ್ಕೆ ಅನುಗುಣವಾಗಿ, ಮಕ್ಕಳು ಯಾವ ಸಮುದಾಯದಿಂದ ಬಂದಿರುತ್ತಾರೆಯೋ ಅಲ್ಲಿಂದಲೇ ಸ್ವಯಂಸೇವಕರನ್ನು ಗುರುತಿಸಲು ನಿರ್ಧರಿಸಿದರು. ಯಾರೊಡನೆ ಬೋಧನೆ-ಕಲಿಕೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಬೇಕಾಗಿದೆಯೋ ಅಂತಹ 15-20 ಮಕ್ಕಳ ಪಟ್ಟಿಯನ್ನು ಸ್ವಯಂಸೇವಕರಿಗೆ ನೀಡಲಾಯಿತು. ಅವರು ತಾವು ಆರಂಭಿಸಬೇಕಿದ್ದ ಸಮುದಾಯ ಕಲಿಕೆ ಗುಂಪುಗಳಲ್ಲಿ ಪ್ರತಿನಿತ್ಯ ತಮ್ಮ ಬಿಡುವಿನ ವೇಳೆಯಲ್ಲಿ 60-90 ನಿಮಿಷಗಳ ಕಾಲವನ್ನು ವ್ಯಯಿಸಬೇಕಿತ್ತು. ಶಿಕ್ಷಕರು ಸ್ವಯಂಸೇವಕರಿಗೆ ಬೆಂಬಲ ನೀಡಲು ವಾರಕ್ಕೆ ಎರಡು ಅಥವಾ ಮೂರು ಬಾರಿ ಪ್ರತಿಯೊಂದು ಸಮುದಾಯ ಕಲಿಕೆ ಗುಂಪಿಗೆ ಭೇಟಿ ಕೊಡುತ್ತಿದ್ದರು.

ಆರಂಭದಲ್ಲಿ ಸ್ವಯಂಸೇವಕರಿಗೆ ಮಕ್ಕಳನ್ನು ಹಾಡು, ಕಥೆ ಹೇಳುವುದು, ಚಿತ್ರ ಬಿಡಿಸುವುದು, ಕಥೆಪುಸ್ತಕಗಳನ್ನು/ಚಿತ್ರ ಸೂಚಿಗಳನ್ನು ನೋಡುವುದು ಮುಂತಾದ ಚಟುವಟಿಕೆಗಳಲ್ಲಿ

ತೊಡಗಿಸಬೇಕೆಂದು ಹೇಳಲಾಯಿತು. ಇದರಿಂದಾಗಿ, ಶಾಲಾ ಶಿಕ್ಷಣದಲ್ಲಿ ಉಂಟಾದ ಅಂತರವು ಹುಟ್ಟುಹಾಕಿದ ಅಗತ್ಯಗಳಿಗೆ ಮಕ್ಕಳು ಮತ್ತು ಸ್ವಯಂಸೇವಕರಿಬ್ಬರೂ ಒಗ್ಗಿಕೊಳ್ಳಲು ಸಮಯ ಸಿಕ್ಕಿತು. ಹಿಂದಿನ ಕಾರ್ಯಾಗಾರದಲ್ಲಿ ಚರ್ಚಿಸಿದಂತೆ ಒಂದಷ್ಟು ವರ್ಕ್‌ಶೀಟ್‌ಗಳನ್ನು (ಕಾರ್ಯ ಹಾಳೆ) ಶಿಕ್ಷಕರಿಗೆ ಕೊಡಲಾಯಿತು. ಮಕ್ಕಳು ಅಪೇಕ್ಷಿತ ಸಾಮರ್ಥ್ಯವನ್ನು ಪಡೆದುಕೊಳ್ಳಲು ನೆರವಾಗುವ ರೀತಿಯಲ್ಲಿ, ಮುಖ್ಯ ಶಿಕ್ಷಕರು ಸ್ವಯಂಸೇವಕರಿಗೆ ಬೋಧನೆ-ಕಲಿಕೆ ಸಾಮಗ್ರಿಗಳು (TLMs -Teaching Learning Materials), ಗಣಿತದ ಕಿಟ್‌ಗಳು ಮತ್ತು ಇನ್ನಿತರ ಸಂಪನ್ಮೂಲಗಳು ಲಭ್ಯವಾಗುವಂತೆ ಮಾಡಿದರು.

ಮುಂಬರುವ ವಾರದಲ್ಲಿ ಮಕ್ಕಳನ್ನು ಶೈಕ್ಷಣಿಕ ಚಟುವಟಿಕೆಗಳಲ್ಲಿ ಬೇಕಾದ ಕಾರ್ಯತಂತ್ರಗಳನ್ನು ಯೋಜಿಸಲು ಮತ್ತು ಹಿಂದಿನ ವಾರದಲ್ಲಿ ತಾವು ಮಾಡಿದ ಪ್ರಯತ್ನಗಳನ್ನು ಪರಾಮರ್ಶಿಸಲು ಹಾಗೂ ಎದುರಿಸಿದ ಸವಾಲುಗಳನ್ನು ಕುರಿತಂತೆ ವಿಚಾರ ವಿನಿಮಯ ಮಾಡಲು ಸ್ವಯಂಸೇವಕರು ಪ್ರತೀ ವಾರ ಶಾಲೆಯಲ್ಲಿ ಒಟ್ಟಾಗಿ ಸೇರುತ್ತಿದ್ದರು. ಈ ಪ್ರಯತ್ನಗಳು ಡಿಜಿಟಲ್ ಮತ್ತು ಅಂತರ್ಜಾಲ ಸೇವೆಗಳ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಿದವು

ಈ ಸಮುದಾಯ ಕಲಿಕೆ ಗುಂಪುಗಳು ಸಾಂಕ್ರಾಮಿಕ ಪಿಡುಗಿನ ಸನ್ನಿವೇಶದಲ್ಲಿ, ಆಸಕ್ತ ಸ್ವಯಂಸೇವಕರಿಗೆ ಅನೌಪಚಾರಿಕವಾಗಿ ಮತ್ತು ತಮ್ಮದೇ ಆದ ಬಿಡುವಿನ ವೇಳೆಯಲ್ಲಿ, ತಮ್ಮದೇ ನೆರೆಹೊರೆಯ ಮಕ್ಕಳ ಕಾಳಜಿಯನ್ನು ತೆಗೆದುಕೊಳ್ಳಲು ಅವಕಾಶವನ್ನು ತೆರೆದವು. ಮಕ್ಕಳು ಸಮುದಾಯ ಕಲಿಕೆ ಗುಂಪುಗಳಿಗೆ ಹಾಜರಾಗುವಂತೆ ನೋಡಿಕೊಳ್ಳುವ ಮೂಲಕ ಮತ್ತು ಅಗತ್ಯ ಸ್ಥಳಾವಕಾಶವನ್ನು ಒದಗಿಸುವುದರ ಮೂಲಕ ಪಾಲಕರು ಈ ಸ್ವಯಂಸೇವಕರಿಗೆ ಬೆಂಬಲ ನೀಡಿದರು.

ಶಿಕ್ಷಕರು ತಮ್ಮ ವೃತ್ತಿಪರ ಹಾಗೂ ಸಾಮಾಜಿಕ ಕರ್ತವ್ಯಗಳನ್ನು ನಿರ್ವಹಿಸಲು ಹೊಸ ದಾರಿಗಳನ್ನು ಕಂಡುಕೊಂಡರು. ತಮಗೆ ಸಾಧ್ಯವಿದ್ದ ಎಲ್ಲ ಕಾರ್ಯತಂತ್ರಗಳನ್ನೂ ಉಪಯೋಗಿಸಿ, ಮಕ್ಕಳಲ್ಲಿ ಕಲಿಕೆಯ ನಷ್ಟವನ್ನು ಕಡಿಮೆ ಮಾಡಲು ಅವರು ಪ್ರಯತ್ನಿಸುತ್ತಿದ್ದರು. ನಾವು ಸಂಪರ್ಕಿಸಿದ ಮತ್ತು ಬೆಂಬಲಿಸಿದ ಬಹಳಷ್ಟು ಶಿಕ್ಷಕರು ಎಲ್ಲಾ ಮಕ್ಕಳೂ ಮೂಲಭೂತವಾಗಿ ಭಾಷೆ ಮತ್ತು ಗಣಿತದ ಕೌಶಲಗಳನ್ನು ಹೊಂದುವಂತೆ ನೋಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಇದರಿಂದ, ಹಿಂದಿನ ತರಗತಿಯ ಕಲಿಕೆಗಳಲ್ಲಿ ಉಂಟಾದ ಹಿನ್ನಡೆಗಳನ್ನು ಇಟ್ಟುಕೊಳ್ಳದೇ ಮಕ್ಕಳು ಪ್ರಸಕ್ತ ತರಗತಿಗಳಲ್ಲಿ ಮುಂದುವರೆಯಲು ನೆರವಾಗುತ್ತಿತ್ತು.

**ಶಾಲೆಗಳು ಮತ್ತೆ ತೆರೆದಾಗ**

ಎಲ್ಲಾ ಮಕ್ಕಳೂ ಒಂದೇ ತೆರನಾಗಿ ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುವಂತೆ ಮಾಡುವುದು ಮತ್ತು ಶಾಲೆಗಳು ಪುನಃ ತೆರೆದಾಗ ಅವರು ತರಗತಿವಾರು ಸಾಮರ್ಥ್ಯಗಳನ್ನು ಪಡೆದುಕೊಳ್ಳಲು ಯಾವುದೇ ತೊಂದರೆಯಾಗದೇ ಕಲಿಕೆಯನ್ನು ಮುಂದುವರೆಸುವಂತಾಗಬೇಕು ಎನ್ನುವುದೇ ನಮ್ಮ ಸದ್ಯದ ಪ್ರಯತ್ನಗಳ ಉದ್ದೇಶವಾಗಿತ್ತು. ಸಮುದಾಯ ಸ್ವಯಂಸೇವಕರ ಮತ್ತು ಗ್ರಾಮ ಪಂಚಾಯತಿ (GP) ಗ್ರಂಥಾಲಯ ಕಾರ್ಯನಿರ್ವಾಹಕ ಅಧಿಕಾರಿಗಳ ಬೆಂಬಲವು ಶಾಲೆಗಳು ಪುನರಾರಂಭವಾದಾಗಲೂ ಮುಂದುವರೆಯುತ್ತವೆ. ಇಲ್ಲಿನ ಬಹುತೇಕ ಪಾಲಕರು ತಮ್ಮ ಮಕ್ಕಳ ಕಲಿಕೆಯನ್ನು ತಾವೇ ಮೇಲ್ವಿಚಾರಣೆ ಮಾಡುವ ಅಥವಾ ಬೆಂಬಲಿಸುವ ಸಾಮರ್ಥ್ಯವನ್ನು ಹೊಂದಿಲ್ಲದ ಕಾರಣ, ಸಮುದಾಯ ಕಲಿಕೆ ಗುಂಪುಗಳ ಸ್ವಯಂಸೇವಕರು, ಪಾಲಕರು ಹಾಗೂ ಮಕ್ಕಳೊಡನೆ ನಿಕಟವಾಗಿ ಕೆಲಸ ಮಾಡುತ್ತಾರೆ. ಬೋಧನೆ-ಕಲಿಕೆಗೆ ಸಂಬಂಧಿಸಿದ ಯೋಜನೆಯನ್ನು ಶಿಕ್ಷಕರು, ಗ್ರಂಥಾಲಯ ಅಧಿಕಾರಿ ಮತ್ತು ಫೌಂಡೇಷನ್ ಸದಸ್ಯರೊಂದಿಗೆ ಹಂಚಿಕೊಳ್ಳಲಾಗುತ್ತದೆ. ಅವರ ಸಾಮೂಹಿಕ ಪ್ರಯತ್ನ ಮತ್ತು ಬೋಧನೆ ಕಲಿಕೆ ಸಾಮಗ್ರಿಗಳ (ಫ್ಲಾಶ್‌ಕಾರ್ಡ್‌ಗಳು, ಕಥೆ, ಚಿತ್ರ, ಚಿತ್ರಪಟ, ಬಣ್ಣಗಳು, ವರ್ಕ್‌ಶೀಟ್‌ಗಳು (ಕಾರ್ಯ ಹಾಳೆ), ಶ್ರವ್ಯ ಹಾಗೂ ದೃಶ್ಯ ಮಾಧ್ಯಮದ ತುಣುಕುಗಳು, ಕೈಪಿಡಿಗಳು ಇತ್ಯಾದಿ) ಮೂಲಕ ಕಳೆದ ಹದಿನೆಂಟು ಅಥವಾ ಅದಕ್ಕೂ ಹೆಚ್ಚು ತಿಂಗಳುಗಳಿಂದ ಶಾಲೆಯಿಂದ ದೂರವಿರುವ ಮಕ್ಕಳೊಂದಿಗೆ ಅರ್ಥಪೂರ್ಣವಾದ ಮತ್ತು ಕಲಿಯುವ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ. ಈ ಬೋಧನೆ ಕಲಿಕೆ ಸಾಮಗ್ರಿಗಳನ್ನು ಗ್ರಾಮ ಪಂಚಾಯತಿ ಗ್ರಂಥಾಲಯಗಳಲ್ಲಿ, ಸಮುದಾಯ ಕಲಿಕೆ ಗುಂಪುಗಳಲ್ಲಿ ಮತ್ತು ಶಾಲೆಗಳಲ್ಲಿ ನಿಯತವಾಗಿ ಉಪಯೋಗಿಸಬಹುದು. ಮಕ್ಕಳ ಸಾಮರ್ಥ್ಯ ನಿರ್ಮಾಣಕ್ಕೆ ಗ್ರಂಥಾಲಯದ ಸ್ಥಳಾವಕಾಶವನ್ನು ಬಳಸಿಕೊಳ್ಳುವ ನಿಟ್ಟಿನಲ್ಲಿ ನಾವು ಗ್ರಂಥಪಾಲಕರನ್ನು ಸಂಪರ್ಕಿಸಿದೆವು ಮತ್ತು ಈ ಕಾರ್ಯದಲ್ಲಿ ಅವರನ್ನು ತೊಡಗಿಸಿಕೊಂಡೆವು. ಇದಕ್ಕೆ ಶಿಕ್ಷಕರ ನೆರವೂ ಇರುತ್ತಿತ್ತು. ಇದರಿಂದಾಗಿ, ಹಳ್ಳಿಗಳಲ್ಲಿ ಕೆಲವು ಗ್ರಾಮ ಪಂಚಾಯತಿ ಗ್ರಂಥಾಲಯಗಳು ರೂಪಾಂತರಗೊಂಡಿವೆ ಮತ್ತು ಹೆಚ್ಚು ಶಿಶು ಸ್ನೇಹಿಗಳಾಗಿವೆ.

ಪ್ರತಿಯೊಂದು ಮಗುವಿನ ಕಲಿಕೆಯ ಮಟ್ಟವನ್ನು ಆಧರಿಸಿ, ಅದನ್ನು ತೊಡಗಿಸಬೇಕಾದ ಚಟುವಟಿಕೆಗಳನ್ನು ಶಿಕ್ಷಕರು ವಿನ್ಯಾಸಗೊಳಿಸುವರು ಮತ್ತು ಮಕ್ಕಳ ಕಲಿಕೆಯಲ್ಲಿನ ಅಂತರವನ್ನು ತಗ್ಗಿಸಿ, ಪ್ರಸಕ್ತ ತರಗತಿ ಮಟ್ಟದ ಕಲಿಕೆಯ ನಿರೀಕ್ಷೆಗೆ ತಕ್ಕಂತೆ ಸಿದ್ಧಗೊಳಿಸಲು, ಸ್ವಯಂಸೇವಕರ ಹಾಗೂ ಫೌಂಡೇಷನ್ ಸದಸ್ಯರ ಬೆಂಬಲವನ್ನು ಪಡೆಯುವರು. ಎದುರಾಗುವ ಸವಾಲುಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ವಾರಕ್ಕೊಮ್ಮೆ ಪರಿಶೀಲನೆಗಳನ್ನು ಮತ್ತು

ಸಭೆಗಳನ್ನು ನಡೆಸಲಾಗುತ್ತದೆ. ಬಹಳಷ್ಟು ಪಾಲಕರು ತಮ್ಮ ಮಕ್ಕಳಿಗೆ ಬೆಂಬಲ ನೀಡಲು ಅಸಮರ್ಥರಾಗಿರುವುದರಿಂದ, ಅವರು ತಮ್ಮ ಮಕ್ಕಳ ಕಲಿಕೆಯ ಮಟ್ಟವನ್ನು ಸುಧಾರಿಸಲು ಸ್ವಯಂಸೇವಕರು ಹಾಗೂ ಶಿಕ್ಷಕರ ಸಂಪರ್ಕದಲ್ಲಿರುವರು. ನಾವು ಸಂಯೋಜಿತ ಮೈಲಿಗಲ್ಲುಗಳನ್ನು ಹೊಂದಿರುವ ವರ್ಕ್‌ಶೀಟ್‌ಗಳನ್ನು ಬಳಸುವುದರ ಕುರಿತಂತೆ ಅಭಿಶಿಕ್ಷಣ (ಅನುಗೊಳಿಸುವಿಕೆ) ಕಾರ್ಯಕ್ರಮಗಳನ್ನು ನಡೆಸಿದ್ದೇವೆ. ಇದು ಶಿಕ್ಷಕರು ಮತ್ತು ಸ್ವಯಂಸೇವಕರಿಗೆ ಶಾಲಾಶಿಕ್ಷಣದಲ್ಲಿನ ವ್ಯತ್ಯಯದಿಂದಾಗಿ ಮಕ್ಕಳಲ್ಲಿ ಉಂಟಾದ ಕಲಿಕೆಯ ತೊಂದರೆಗಳನ್ನು ಮೂಲಭೂತ ಅಕ್ಷರ ಜ್ಞಾನ ಮತ್ತು ಗಣಿತದ ಜ್ಞಾನವನ್ನು ಪೋಷಿಸುವುದರ ಮೂಲಕ ಕಡಿಮೆ ಮಾಡಲು ನೆರವಾಗುತ್ತದೆ. ಶಿಕ್ಷಕರು *ಸಂವೇದ*, *ಚಂದನ* ಟಿವಿಯಲ್ಲಿ ಪ್ರಸಾರವಾಗುವ ಟೆಲಿತರಗತಿಗಳು ಮತ್ತು ಅದನ್ನು ಅನುಸರಿಸುವ ಚರ್ಚೆ, ಸಂವಾದಗಳನ್ನು ವೀಕ್ಷಿಸುವ ಅವಕಾಶಗಳನ್ನು ಒದಗಿಸುವ ಮೂಲಕ ಮಕ್ಕಳಿಗೆ ಬೆಂಬಲ ನೀಡುತ್ತಾರೆ. ಸಾಧ್ಯವಿರುವಲ್ಲೆಲ್ಲ, ಅಂತರ್‌ಶಾಲಾ ವೀಡಿಯೋ ಮಾತುಕತೆಗಳನ್ನು ಆಯೋಜಿಸಲಾಗಿದೆ. ಇದು ಎರಡೂ ಶಾಲೆಗಳ ಮಕ್ಕಳಿಗೆ ತಾವು ಓದಿದ, ನೋಡಿದ ಕತೆಗಳು, ಕವಿತೆಗಳು ಮತ್ತು ಚಿತ್ರಗಳ ಕುರಿತಾಗಿ ಪರಸ್ಪರ ಸಂವಹಿಸಲು ಅನುವು ಮಾಡಿಕೊಟ್ಟಿದೆ.

ಈ ಬ್ಲಾಕ್‌ನಲ್ಲಿ (ಹೊಸಪೇಟೆ), ಯಾವುದೇ ಮಗುವೂ ಬೋಧನೆ-ಕಲಿಕೆ ಪ್ರಕ್ರಿಯೆಯನ್ನು ಕೈಗೊಳ್ಳಲು ಇರುವ ವ್ಯವಸ್ಥೆಯ ಕೊರತೆಯನ್ನು ಅನುಭವಿಸುವುದಿಲ್ಲ ಎಂದು ನಾವು ದೃಢವಾಗಿ ನಂಬಿದ್ದೇವೆ. ವಯಸ್ಸು ಮತ್ತು ತರಗತಿಗೆ ಸಮುಚಿತವಾದ ಕೌಶಲಗಳನ್ನು ಪುನಃ ಪಡೆದುಕೊಳ್ಳಲು ಅವರಿಗೆ ನೆರವಾಗುವ ದಿಸೆಯಲ್ಲಿ, ಅವರ ಪ್ರದೇಶದಲ್ಲಿಯೇ ಇರುವ, ಸವಲತ್ತು ಸೌಕರ್ಯಗಳನ್ನು ಹೊಂದಿರುವ ಯಾವುದೇ ಮಗುವಿಗೆ ಸಿಗುವ ಅವಕಾಶವನ್ನೇ ಅವರಿಗೂ ಒದಗಿಸಲಾಗುತ್ತದೆ.

***

**ರಾಘವೇಂದ್ರ ಬಿ.ಟಿ.** ಅವರು ೨೦೦೯ ರಲ್ಲಿ ಆಜೀಂ ಪ್ರೇಮ್‌ಜಿ ಫೌಂಡೇಷನ್‌ನ್ನು ಫೆಲೋ ಆಗಿ ಸೇರಿದರು. ಪ್ರಸ್ತುತ ಅವರು, ಕರ್ನಾಟಕದ, ಬಳ್ಳಾರಿಯ ಹೊಸಪೇಟೆಯಲ್ಲಿರುವ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಸ್ಥೆಯಲ್ಲಿ ಆರಂಭಿಕ ಭಾಷೆ, ಆರಂಭಿಕ ಗಣಿತ ಮತ್ತು ಇಂಗ್ಲಿಷ್‌ನ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಇದಕ್ಕೂ ಮೊದಲು ಅವರು ಖಾಸಗಿ ಪದವಿಪೂರ್ವ ವಿದ್ಯಾಲಯವೊಂದರಲ್ಲಿ ಬೋಧಿಸುತ್ತಿದ್ದರು. ಅವರನ್ನು raghavendra.bt@azimpremjifoundation.org ಮೂಲಕ ಸಂಪರ್ಕಿಸಬಹುದು.